CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೩೯ | ಬೆಂಗಳೂರು, ಗುರುವಾರ, ಆಗಸ್ಟ್ ೧೨, ೨೦೦೪ (ಶ್ರಾವಣ ೨೧, ಶಕ ವರ್ಷ ೧೯೨೬) | ಸಂಚಿಕೆ ೩೩

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು**

**ಸಂಖ್ಯೆ: ತೋಇ:ಸಸಂ:ಹಿಸತೋನಿ:ಪುವಿ:ಸತೋಅ:2:2004-2005, ದಿನಾಂಕ: 2ನೇ ಆಗಸ್ಟ್ 2004**

**"ತೋಟಗಾರಿಕೆ ಇಲಾಖೆಗೆ ಆಂಥೂರಿಯಂ ಮತ್ತು ಆರ್ಕಿಡ್ ಅಂಗಾಂಶ ಕೃಷಿ ಸಸಿಗಳನ್ನು ಸರಬರಾಜು ಮಾಡಲು ಅಲ್ಪಾವಧಿ ಮರು ಟೆಂಡರ್ ಕರೆಯುವ ಬಗ್ಗೆ"**

2004-05ನೇ ಸಾಲಿನ ವಾಣಿಜ್ಯ ಪುಷ್ಪಾಭಿವೃದ್ಧಿ ಯೋಜನೆಯ ಪ್ರದೇಶ ವಿಸ್ತರಣೆ ಕಾರ್ಯಕ್ರಮದಲ್ಲಿ ವಿವಿಧ ಜಿಲ್ಲೆಗಳ ಫಲಾನುಭವಿಗಳಿಗೆ ಆಂಥೂರಿಯಂ ಮತ್ತು ಆರ್ಕಿಡ್ ಅಂಗಾಂಶ ಕೃಷಿ ಗಿಡಗಳನ್ನು ಸರಬರಾಜು ಮಾಡಲು ಇಚ್ಛಿಸುವ ಸಂಸ್ಥೆ ಅಥವಾ ವ್ಯಕ್ತಿಗಳಿಂದ ಸೀಲು ಮಾಡಿದ ಟೆಂಡರ್‌ಅನ್ನು ಆಹ್ವಾನಿಸಲಾಗಿದೆ. ಟೆಂಡರ್ ಫಾರಂಗಳನ್ನು ಪಡೆಯಲು ಕೊನೆಯ ದಿನಾಂಕ: 16.08.2004. ಟೆಂಡರ್ ಫಾರಂ ಬೆಲೆ ರೂ.100.00. ಭರ್ತಿ ಮಾಡಿದ ಟೆಂಡರ್‌ಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 16.08.2004 ಸಂಜೆ 5 ಗಂಟೆ. ಟೆಂಡರ್‌ಅನ್ನು ದಿನಾಂಕ: 17.08.2004 ರಂದು ಬೆಳಿಗ್ಗೆ 11.00 ಗಂಟೆಗೆ ತೆರೆಯಲಾಗುವುದು. ಹೆಚ್ಚಿನ ವಿವರಗಳಿಗೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಪುಷ್ಪಾಭಿವೃದ್ಧಿ ವಿಭಾಗ, ಲಾಲ್‌ಬಾಗ್, ಬೆಂಗಳೂರು ರವರನ್ನು ಸಂಪರ್ಕಿಸಬಹುದು.

ಪಿ.ಆರ್. 367 ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು.

**ಪೊಲೀಸ್ ಅಧೀಕ್ಷಕರ ಕಛೇರಿ, ವಿಜಾಪೂರ ಜಿಲ್ಲೆ, ವಿಜಾಪೂರ**

**ಅಧಿಸೂಚನೆ ಸಂಖ್ಯೆ: ಸಿಬ್ಬಂದಿ:2:240:2004, ದಿನಾಂಕ: 26ನೇ ಜುಲೈ 2004**

**ಶ್ರೀ ಎಫ್.ಎನ್. ತಳವಾರ** ಪಿ.ಎಸ್.ಐ. ಓ.ಓ.ಡಿ. ಬಾದಾಮಿ ಪೊಲೀಸ್ ಠಾಣೆ, ಬಾಗಲಕೋಟ ಜಿಲ್ಲೆಯಲ್ಲಿ ಕೆಲಸ ಮಾಡುತ್ತಿರುವ ಇವರ ಹೆಸರನ್ನು **ಎಫ್.ಎನ್. ಲಿಂಗದಾಳ** ಅಂತಾ ಬದಲಾವಣೆಗೆ ಅನುಮತಿ ನೀಡಲಾಗಿದೆ.

ಪಿ.ಡಿ. 132 ಆರಕ್ಷಕಾಧೀಕ್ಷಕರು, ಬಿಜಾಪೂರ ಇವರ ಪರವಾಗಿ.

**ತೋಟಗಾರಿಕೆ ಇಲಾಖೆ**

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರವರ ಕಛೇರಿ, (ರಾಜ್ಯ ವಲಯ) ಚಿತ್ರದುರ್ಗ**

**ಸಂಖ್ಯೆ: ಹಿಸತೋನಿ:ರಾವ:ಚಿದು:ಸಸಂ:ಪ್ರ:700:2004-05:701, ದಿನಾಂಕ: 29ನೇ ಜುಲೈ 2004**

**ಸಪೋಟ, ಸೀಬೆ, ಫಸಲುಗಳ ಟೆಂಡರ್-ಕಂ-ಬಹಿರಂಗ ಹರಾಜು ಪ್ರಕಟಣೆ**

2004ನೇ ಸಾಲಿನ ಎರಡನೇ ಅವಧಿಯ ಅಂದರೆ, ದಿನಾಂಕ: 01.07.2004 ರಿಂದ 31.12.2004 ರವರೆಗಿನ, ಚಿತ್ರದುರ್ಗ ಜಿಲ್ಲೆಯ ರಾಜ್ಯ ವಲಯದ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ ತೋಟಗಾರಿಕೆ ಕ್ಷೇತ್ರ:ನರ್ಸರಿಗಳಲ್ಲಿ ಬೆಳೆದಿರುವ ಫಸಲನ್ನು ಹರಾಜು ಅನುಮೋದಿಸಿದ ದಿನಾಂಕದಿಂದ ರೂಢಿಸಿಕೊಳ್ಳಲು ಟೆಂಡರ್-ಯಾ-ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ಹೆಚ್ಚಿನ ವ್ಯಾಪಾರಿಗಳು ಸರಿಯಾದ ಸಮಯಕ್ಕೆ ಹಾಜರಿದ್ದು ಇದರಲ್ಲಿ ಭಾಗವಹಿಸಲು ಕೋರಲಾಗಿದೆ. ಹೆಚ್ಚಿನ ವಿವರಗಳು ಮತ್ತು ಟೆಂಡರ್ ಫಾರಂಗಳನ್ನು ಈ ಕಛೇರಿಯಲ್ಲಿ ಹಾಗೂ ಅಧೀನ ಕಛೇರಿಗಳಲ್ಲಿ ರಜಾ ದಿನಗಳನ್ನು ಬಿಟ್ಟು ಕೆಲಸದ ವೇಳೆಯಲ್ಲಿ ರೂ.25-00 ಗಳನ್ನು ಪಾವತಿ ಮಾಡಿ ನಿಗದಿತ ಫಾರಂಗಳನ್ನು ಪಡೆಯಬಹುದು. ಹರಾಜನ್ನು ಪ್ರತಿಯೊಂದು ಜಾತಿ ಫಸಲಿಗೂ ಪ್ರತ್ಯೇಕವಾಗಿ ಮಾಡಲಾಗುವುದು.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ : ನರ್ಸರಿಗಳ ಹೆಸರು | ಫಸಲಿನ ವಿವರ | ಠೇವಣಿ ಮೊತ್ತ | ಟೆಂಡರ್ ಸ್ವೀಕರಿಸಲು ಕೊನೆಯ ದಿನಾಂಕ ಹಾಗೂ ವೇಳೆ | ಟೆಂಡರ್-ಕಂ-ಹರಾಜು ನಡೆಸುವ ದಿನಾಂಕ : ವೇಳೆ |
|---|---|---|---|---|---|
| 1 | ಆರ್.ಎಂ.ಸಿ. ಕ್ಷೇತ್ರ, ದಾವಣಗೆರೆ. | ಸಪೋಟ | 5000-00 | 17.08.2004 ಸಂಜೆ 5-00 | 18.08.2004 ಬೆಳಿಗ್ಗೆ 11-30 |
| 2 | ಎನ್. ಮಹದೇವಪುರ | ಸಪೋಟ<br>ಸೀಬೆ | 5000-00<br>500-00 | 24.08.2004 ಸಂಜೆ 5-00 | 25.08.2004 ಬೆಳಿಗ್ಗೆ 11-30 |
| 3 | ಕಛೇರಿ ನರ್ಸರಿ, ಚಿತ್ರದುರ್ಗ | ಸಪೋಟ | 5000-00 | 25.08.2004 ಸಂಜೆ 5-00 | 26.08.2004 ಬೆಳಿಗ್ಗೆ 11-30 |
| 4 | ರಾಯಪುರ ಕ್ಷೇತ್ರ | ಸಪೋಟ | 5000-00 | 26.08.2004 ಸಂಜೆ 5-00 | 27.08.2004 ಬೆಳಿಗ್ಗೆ 12-00 |
| 5 | ವೇದಾವತಿ ಕ್ಷೇತ್ರ, ಹಿರಿಯೂರು. | ಸಪೋಟ | 5000-00 | 28.08.2004 ಸಂಜೆ 5-00 | 30.08.2004 ಬೆಳಿಗ್ಗೆ 11-30 |
| 6 | ಐಯ್ಯನಹಳ್ಳಿ ಕ್ಷೇತ್ರ | ಸಪೋಟ | 5000-00 | 30.08.2004 ಸಂಜೆ 5-00 | 31.08.2004 ಬೆಳಿಗ್ಗೆ 11-30 |
| 7 | ಟಿ.ಎನ್. ಕೆರೆ, ಚಿತ್ರದುರ್ಗ | ಸಪೋಟ | 500-00 | 25.08.2004 ಸಂಜೆ 5-00 | 26.08.2004 ಬೆಳಿಗ್ಗೆ 12-30 |

**ವಿಶೇಷ ಸೂಚನೆ:** 1) ಠೇವಣಿ ಮೊತ್ತವನ್ನು ಕ್ರಾಸ್ ಮಾಡಿದ ಡಿ.ಡಿ. ರೂಪದಲ್ಲಿ ಮಾತ್ರ ಸ್ವೀಕರಿಸಲಾಗುವುದು.

ಟೆಂಡರ್‌ದಾರರು ಭರ್ತಿ ಮಾಡಿದ ಟೆಂಡರ್ ಫಾರಂ ಜೊತೆಯಲ್ಲಿ ತಾವು ನಮೂದಿಸುವ ಟೆಂಡರ್ ಮೊತ್ತದ ಶೇ.50 ಭಾಗದ ಮೊತ್ತವನ್ನು ಮತ್ತು ನಿಗದಿಪಡಿಸಿದ ಠೇವಣಿ ಮೊತ್ತವನ್ನು ಅಡ್ಡಗೆರೆ ಎಳೆದ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯ ವಲಯ) ಚಿತ್ರದುರ್ಗ ರವರ ಹೆಸರಿನಲ್ಲಿ ಪಡೆದ 'ಕಡ್ಡಾಯವಾಗಿ ಲಗತ್ತಿಸಬೇಕು' ಟೆಂಡರ್ ಫಾರಂ ನಲ್ಲಿ ಹೆಸರು, ವಿಳಾಸ, ಟೆಂಡರ್ ಮೊತ್ತ ಇತ್ಯಾದಿಗಳನ್ನು ದಾಖಲಿಸಿ ಸಹಿ ಮಾಡಿರಬೇಕು. ಇಲ್ಲದಿದ್ದರೆ ಅಪೂರ್ಣ ಟೆಂಡರ್ ಎಂದು ಪರಿಗಣಿಸಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

ಬಹಿರಂಗ ಹರಾಜಿನಲ್ಲಿ ಬಿಡ್ಡು ಮಾಡುವವರು ಸಹ ನಿಗದಿ ಪಡಿಸಿದ ಠೇವಣಿ ಹಣವನ್ನು ಡಿ.ಡಿ. ರೂಪದಲ್ಲಿ ಸಲ್ಲಿಸಿ ಬಿಡ್ಡು ಮಾಡಲು ಅರ್ಹತೆಯನ್ನು ಪಡೆಯಬೇಕು. ನಗದು ಹಣ ಸ್ವೀಕರಿಸುವುದಿಲ್ಲ. ಟೆಂಡರ್ ಹಾಗೂ ಬಿಡ್ಡಿನ ಮೊತ್ತಗಳಲ್ಲಿ ಅತಿ ಹೆಚ್ಚಿನ ಮೊತ್ತವಾದ ಒಂದನ್ನು ಮಾತ್ರ ಪರಿಗಣಿಸಲಾಗುವುದು. ಅತಿ ಹೆಚ್ಚಿನ ಮೊತ್ತದ ಬಿಡ್ಡುದಾರರು ಬಿಡ್ಡಿನ ಮೊತ್ತದ ಶೇ.50 ಭಾಗದ ಮೊತ್ತವನ್ನು ಅಂದೇ ಡಿ.ಡಿ. ರೂಪದಲ್ಲಿ ಪಾವತಿ ಮಾಡಬೇಕು.

ಮೇಲಿನ ಕ್ಷೇತ್ರಗಳ ಫಸಲನ್ನು ಟೆಂಡರ್-ಕಂ-ಹರಾಜು ಅನುಮೋದನೆಯಾದ ದಿನಾಂಕದಿಂದ 10 ದಿನಗಳ ಒಳಗೆ ಪೂರ್ಣ ಮೊತ್ತವನ್ನು ಪಾವತಿಸಿ ಫಸಲನ್ನು ರೂಢಿಸಿಕೊಳ್ಳಬಹುದಾಗಿರುತ್ತದೆ. ಸದರಿ ಟೆಂಡರ್-ಕಂ-ಹರಾಜು ಪ್ರಕ್ರಿಯೆಯನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖೆಯ ಅಧಿಕಾರಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಹೆಚ್ಚಿನ ಪರಿಷ್ಕೃತ ನಿಯಮಾವಳಿಗಳ ವಿವರ, ನಿಬಂಧನೆ, ಷರತ್ತುಗಳನ್ನು ಈ ಕಛೇರಿಯಲ್ಲಿ ಅಥವಾ ಆಯಾಯ ಕ್ಷೇತ್ರಗಳಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು. ಯಶಸ್ವಿ ಬಿಡ್ಡುದಾರರು ಒಟ್ಟು ಫಸಲಿನ ಶೇ.5 ರಷ್ಟು ಭಾಗವನ್ನು ಇಲಾಖೆ ನಿಗದಿಪಡಿಸಿದ ದರದಲ್ಲಿ ಮಾರಾಟ ಮಾಡಲು ಸಿದ್ದರಿರಬೇಕು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು,
(ರಾಜ್ಯ ವಲಯ) ಚಿತ್ರದುರ್ಗ.

ಪಿ.ಆರ್. 364

**ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಸಂಗ್ರಹ-2(4)93/2003-04**

ಪೊಲೀಸ್ ಇಲಾಖೆಗೆ ಅಗತ್ಯವಿರುವ ಈ ಕೆಳಕಂಡ ಉಪಕರಣಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು ಆಹ್ವಾನಿಸಲಾಗಿದೆ.

| Sl.No. | Name of the Equipment | Required Quantity |
|---|---|---|
| 1 | Digital Sound Level Meter | 20 Nos |
| 2 | Smoke Pollution Monitoring Equipments for Petrol Vehicles | 15 Nos |
| 3 | Smoke Pollution Monitoring Equipments for Diesel Vehicles | 15 Nos |

**ಸೂಚನೆ:** ತಯಾರಿಕಾ ಘಟಕ/ರೆಪ್ಯೂಟೆಡ್ ಏಜೆಂಟ್ ಮತ್ತು ರೆಪ್ಯೂಟೆಡ್ ಕಂಪನಿಗಳಿಗೆ ಆದ್ಯತೆ ನೀಡಲಾಗುವುದು.

ಟೆಂಡರ್ ಅರ್ಜಿಗಳನ್ನು ಹಾಗೂ ಪ್ರತಿಯೊಂದು ಉಪಕರಣದ ನಿರ್ದಿಷ್ಟತೆ/ವಿಶಿಷ್ಟತೆಯ ಮೂಲಕ (Specification) ದಿನಾಂಕ: 01.08.2004 ರಿಂದ 20.08.2004 ರವರೆಗೆ ಕೆಲಸಗಳ ದಿನದಂದು ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿ ನಮೂನೆಯ ಬೆಲೆ ರೂ.200/- ಗಳನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ

ಪಾವತಿಸಬಹುದಾಗಿದೆ. (ಮನಿಯಾರ್ಡರ್‌ನಲ್ಲಿ ಪಾವತಿಸಿದರೆ ತಿರಸ್ಕರಿಸಲಾಗುವುದು) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯಲು ಇಚ್ಛಿಸುವವರು ರೂ.200/- ಗಳಿಗೆ ಡಿ.ಡಿ.ಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಕೋರಲಾಗಿದೆ. ಹಾಗೂ ಸ್ವವಿಳಾಸ ಹೊಂದಿದ ಲಕೋಟೆಯ ಮೇಲೆ ರೂ.30/- ಗಳ ಅಂಚೆ ಚೀಟಿಯನ್ನು ಲಗತ್ತಿಸಿ ಕಳುಹಿಸಲು ಕೋರಿದೆ.

ಭರ್ತಿ ಮಾಡಿದ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಶೇಕಡ 2 ರಷ್ಟು ಇ.ಎಂ.ಡಿ. ಯನ್ನು ಪ್ರತಿ ಉಪಕರಣದ ಮೌಲ್ಯಕ್ಕೆ ಮುಂಗಡ ಠೇವಣಿಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದ ಡಿ.ಡಿ. ಹಾಗೂ ಮಾದರಿಯ ಬ್ರೋಚರ್ಸ್, ಕ್ಯಾಟ್ಲಾಗ್ಸ್ ವಿತ್ ಟೆಕ್ನಿಕಲ್ ಸ್ಪೆಸಿಫಿಕೇಷನ್, ಆರ್ಥಿಕ ಸ್ಥಿತಿ, ವಾರ್ಷಿಕ ವಹಿವಾಟು ಮತ್ತು ಇತರೆ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಮೊಹರು ಮಾಡಿದ ಕವರಿನಲ್ಲಿ ಈ ಕಛೇರಿಯ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, (ಕೇಂದ್ರಸ್ಥಾನ-1) ರವರಾದ ಶ್ರೀ ಎಸ್. ರಾಮಕೃಷ್ಣ ಐ.ಪಿ.ಎಸ್. ರವರಿಗೆ ಹೆಸರಿಸಿ, ದಿನಾಂಕ: 31.08.2004ರ ಸಂಜೆ 5.00 ಗಂಟೆಯೊಳಗೆ ಸಲ್ಲಿಸತಕ್ಕದ್ದು. ಈ ದಿನಾಂಕದ ನಂತರದ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ. ಮೊಹರು ಮಾಡಿದ ಲಕೋಟೆಯ ತುದಿಯಲ್ಲಿ **"ಶಬ್ದ ಮತ್ತು ಮಾಲಿನ್ಯ ಉಪಕರಣಗಳನ್ನು ಸರಬರಾಜು ಮಾಡುವ ಬಗ್ಗೆ ಅರ್ಜಿ"** ಎಂದು ನಮೂದಿಸಿರಬೇಕು. ಹಾಗೂ ಲಕೋಟೆಯು ಸರಬರಾಜು ಮಾಡಲು ಬಯಸುವ ಸಂಸ್ಥೆಯ ವಿಳಾಸವನ್ನು ಒಳಗೊಂಡಿರಬೇಕು. ಸ್ವೀಕರಿಸಿದ ಟೆಂಡರ್‌ಗಳನ್ನು ದಿನಾಂಕ: 01.09.2004 ರಂದು ಬೆಳಿಗ್ಗೆ 11.00 ಗಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಇಚ್ಛೆಯುಳ್ಳ ಟೆಂಡರ್‌ದಾರರು ಟೆಂಡರ್‌ಗಳನ್ನು ತೆರೆಯುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು.

ಪ್ರತಿ ಉಪಕರಣಗಳಿಗೆ ಪ್ರತ್ಯೇಕವಾಗಿ ಇ.ಎಂ.ಡಿ. ಯನ್ನು ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಮತ್ತು ಟೆಂಡರ್‌ದಾರರು ಅಂಚೆ ಮೂಲಕ / ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿ ಮತ್ತು ದಾಖಲಾತಿಗಳು ತಡವಾಗಿ ತಲುಪಿದಲ್ಲಿ / ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೆ ಸಾರಾಸಗಟಾಗಿ / ಭಾಗಶಃ ಒಪ್ಪಿಕೊಳ್ಳುವ, ಹೆಚ್ಚು ಮತ್ತು ಕಡಿಮೆ ಮಾಡುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್
ಪೊಲೀಸ್‌ರವರ ಪರವಾಗಿ.

ಪಿ.ಆರ್. 365

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರ ಕಾರ್ಯಾಲಯ**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಸಂಖ್ಯೆ: ಎ2.ಬಿಜಿಟಿ.ಕಟ್ಟಡ.ವಿವ.25/2004-05, ದಿನಾಂಕ: 10ನೇ ಜುಲೈ 2004**

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರುವುದೇನೆಂದರೆ ಸೊರಬ ತಾಲ್ಲೂಕು ಆನವಟ್ಟಿಯಲ್ಲಿ ವಲಯ ಅರಣ್ಯಾಧಿಕಾರಿಗಳ ಕಛೇರಿಯ ಕಟ್ಟಡದ ನಿರ್ಮಾಣ ಕಾಮಗಾರಿಯನ್ನು ನಿರ್ವಹಿಸಲು ಸಾಗರ ಅರಣ್ಯ ವಿಭಾಗದಲ್ಲಿ 2004-05ನೇ ಸಾಲಿಗೆ ನೋಂದಾಯಿಸಲ್ಪಟ್ಟ ಅರ್ಹ ಅರಣ್ಯ ಗುತ್ತಿಗೆದಾರರಿಂದ ಮೊಹರಾದ ಲಕೋಟೆಯಲ್ಲಿ ಟೆಂಡರನ್ನು ಸಾಗರ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಅಥವಾ ಅವರಿಂದ ಅಧಿಕೃತವಾಗಿ ನಿಯೋಜಿಸಲ್ಪಟ್ಟ ಅಧಿಕಾರಿಗಳು ದಿನಾಂಕ: 16.8.2004 ರಂದು ಬೆಳಿಗ್ಗೆ 11-00 ಗಂಟೆಯಿಂದ ಅಪರಾಹ್ನ 3-30 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಸಾಗರ ವಿಭಾಗ, ಸಾಗರ ಇವರ ಕಛೇರಿಯಲ್ಲಿ ಸ್ವೀಕರಿಸುವರು ಮತ್ತು ಅದೇ ದಿನ ಅಪರಾಹ್ನ 4-00 ಗಂಟೆಗೆ ಸರಿಯಾಗಿ ಹಾಜರಿರುವ ಗುತ್ತಿಗೆದಾರರ ಸಮ್ಮುಖದಲ್ಲಿ ಟೆಂಡರಿನ ಫಲಿತಾಂಶವನ್ನು ಘೋಷಿಸುವರು. ಆಸಕ್ತಿಯುಳ್ಳವರು ಈ ವಿಭಾಗದಲ್ಲಿ 2004-05ನೇ ನೋಂದಣಿ ಮಾಡಿಸಿರುವ ಲೋಕೋಪಯೋಗಿ ಇಲಾಖೆಯಲ್ಲಿ ಅಥವಾ ಇನ್ನಿತರ ಯಾವುದೇ ಸರ್ಕಾರಿ ಇಲಾಖೆಗಳಲ್ಲಿ ಸಿವಿಲ್ ಕಾಮಗಾರಿಗಳನ್ನು ನಿರ್ವಹಿಸಿ ಅನುಭವ ಇರುವ ಅರ್ಹ ಗುತ್ತಿಗೆದಾರರು ಸದರಿ ಕಟ್ಟಡ ನಿರ್ಮಾಣ ಕಾಮಗಾರಿ ನಿರ್ವಹಿಸಲು ಟೆಂಡರನ್ನು ನಿಗದಿತ ನಮೂನೆಯಲ್ಲಿ ಸಲ್ಲಿಸಬಹುದಾಗಿದೆ.

**ತಪಶೀಲು**

| ಯುನಿಟ್ ಸಂಖ್ಯೆ | ವಲಯ | ಕಾಮಗಾರಿಯ ವಿವರಣೆ | ಸ್ಥಳ | ಕಾಮಗಾರಿಯ ಅಂದಾಜು ಮೊತ್ತ | ಟೆಂಡರಿನ ಇಎಂಡಿ ಮೊತ್ತ | ಕೆಲಸ ಪೂರೈಸಬೇಕಾದ ಅವಧಿ |
|---|---|---|---|---|---|---|
| 1 | ಆನವಟ್ಟಿ | ವಲಯ ಅರಣ್ಯಾಧಿಕಾರಿಗಳ ಕಛೇರಿ, ಆನವಟ್ಟಿ ವಲಯ ಆನವಟ್ಟಿ ಇವರ ಕಛೇರಿ ಕಟ್ಟಡದ ನಿರ್ಮಾಣ | ಸರ್ಕಾರಿ ನಾಟಾ ಸಂಗ್ರಹಾಲಯ ಆವರಣ ಆನವಟ್ಟಿ | ರೂ.5.00 ಲಕ್ಷ | ರೂ. 12500/- | 31.12.2004 |

**ನಿಬಂಧನೆಗಳು:**

1. ಟೆಂಡರ್ ನಮೂನೆಯನ್ನು ನಿಗದಿತ ಶುಲ್ಕ ಪಾವತಿಸಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಸಾಗರ ವಿಭಾಗ, ಸಾಗರ ಇವರ ಕಛೇರಿಯಲ್ಲಿ ಟೆಂಡರ್ ದಿನಾಂಕದಂದು ಅಪರಾಹ್ನ 1.00 ಗಂಟೆಯವರೆಗೆ ಮಾತ್ರ ಪಡೆಯಬಹುದು.
2. ಟೆಂಡರಿನ ಇ.ಎಂ.ಡಿ. ಮೊತ್ತ (ಮುಂಗಡ ಠೇವಣಿ)ಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಸಾಗರ ವಿಭಾಗ, ಸಾಗರ ಇವರ ಹೆಸರಿಗೆ ಬ್ಯಾಂಕ್ ಡಿ.ಡಿ. ಅಥವಾ ಪೇ ಆರ್ಡರ್ ಪಡೆದು ಟೆಂಡರ್ ನಮೂನೆಯೊಂದಿಗೆ ಲಗತ್ತಿಸಬೇಕು. (ಇ.ಎಂ.ಡಿ. ಮೊತ್ತ ಲಗತ್ತಿಸದ ಟೆಂಡರ್ ನಮೂನೆಯನ್ನು ಪರಿಗಣಿಸಲಾಗುವುದಿಲ್ಲ)
3. ಟೆಂಡರ್ ದರವನ್ನು ಮಂಜೂರಾದ ಅಂದಾಜುಪಟ್ಟಿ ಮೊತ್ತಕ್ಕೆ ಶೇಕಡಾ ಎಷ್ಟು ಹೆಚ್ಚು ಅಥವಾ ಎಷ್ಟು ಕಡಿಮೆ ಎಂದು ಸ್ಪಷ್ಟವಾಗಿ ನಮೂದಿಸಬೇಕು.

4. ಟೆಂಡರ್ ದಿನಾಂಕಕ್ಕೆ ಮೊದಲು ಈ ವಿಭಾಗದಲ್ಲಿ ಹೆಸರನ್ನು ನೋಂದಣಿ ಮಾಡಿಸಿರುವ ಲೋಕೋಪಯೋಗಿ ಇಲಾಖೆ ಅಥವಾ ಇನ್ನಿತರ ಯಾವುದೇ ಸರ್ಕಾರಿ ಇಲಾಖೆಗಳಲ್ಲಿ ಸಿವಿಲ್ ಕಾಮಗಾರಿಗಳನ್ನು ನಿರ್ವಹಿಸಿ ಅನುಭವವಿರುವ ಅರ್ಹ ಗುತ್ತಿಗೆದಾರರು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸಬಹುದಾಗಿರುತ್ತದೆ.
5. ಟೆಂಡರ್ ಸಕ್ಷಮ ಪ್ರಾಧಿಕಾರಿಯವರಿಂದ ಅಂಗೀಕಾರಗೊಳ್ಳುವ ಅಥವಾ ರದ್ದಾಗುವ ಷರತ್ತಿಗೆ ಒಳಪಟ್ಟಿರುತ್ತದೆ.
6. ಕಾಮಗಾರಿಯ ಬಿಲ್ಲುಗಳ ಪಾವತಿಯು ಪ್ರಸಕ್ತ ಸಾಲಿನಲ್ಲಿ ಬಿಡುಗಡೆಯಾಗುವ ಅನುದಾನದ ಮಿತಿಗೆ ಒಳಪಟ್ಟಿರುತ್ತದೆ.
7. ಟೆಂಡರನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗಾರ ವಿಭಾಗ, ಸಾಗರ ಇವರು ಹೊಂದಿರುತ್ತಾರೆ.
8. ಆಸಕ್ತರು ಹೆಚ್ಚಿನ ವಿವರಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರ ಕಛೇರಿಯಲ್ಲಿ ಕಛೇರಿಯ ವೇಳೆಯಲ್ಲಿ ಪಡೆಯಬಹುದಾಗಿದೆ.

ಪಿ.ಆರ್. 366 ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

## ಪೊಲೀಸ್ ಅಧೀಕ್ಷಕರ ಕಛೇರಿ, ಬೆರಳು ಮುದ್ರೆ ಸಂಗ್ರಹಾಲಯ, 5ನೇ ಮಹಡಿ, ಕೆ.ಹೆಚ್.ಬಿ. ಕಟ್ಟಡ, ಕೆ.ಜಿ. ರಸ್ತೆ, ಕಾವೇರಿ ಭವನ, ಬೆಂಗಳೂರು-560 009

**ಅಧಿಸೂಚನೆ ಸಂಖ್ಯೆ: ಎಂಟಿ:19:ಬೆಮುಸಂ:2004, ದಿನಾಂಕ: 5ನೇ ಆಗಸ್ಟ್ 2004**

**ವಿಷಯ:** ಈ ಘಟಕದ ನಿರುಪಯುಕ್ತಗೊಳಿಸಿದ ವಾಹನಗಳ ಸಂಖ್ಯೆ: ಸಿಎಇ 9789 ಅಂಬಾಸಿಡರ್ ಕಾರು ಮತ್ತು ಎಂಇಓ 2234 ಮಹೇಂದ್ರ ಜೀಪು ಇವುಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ-6:ಟಿಸಿಇ:87, ದಿನಾಂಕ: 15.12.97.
2) ಪ್ರಧಾನ ಕಛೇರಿ, ಬೆಂಗಳೂರು ರವರ ಪತ್ರದ ಸಂಖ್ಯೆ: ವಾಸಾ(1)27:2004-05, ದಿ:12.7.2004.

ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ಈ ಕಛೇರಿಯ ವಾಹನಗಳ ಸಂಖ್ಯೆ: ಸಿಎಇ 9789 ಅಂಬಾಸಿಡರ್ ಕಾರು ಮತ್ತು ಎಂಇಓ 2234 ಮಹೇಂದ್ರ ಜೀಪು ಈ ವಾಹನಗಳನ್ನು ನಿರುಪಯುಕ್ತ ವಾಹನಗಳೆಂದು ಘೋಷಿಸಲಾಗಿದ್ದು, ಸದರಿ ವಾಹನಗಳನ್ನು ದಿನಾಂಕ: 25.9.2004 ರಂದು ಬೆಳಿಗ್ಗೆ 10.30 ಗಂಟೆಗೆ ಕಾವೇರಿ ಭವನದ ಹೌಸಿಂಗ್ ಬೋರ್ಡ್ ಕಾಂಪ್ಲೆಕ್ಸ್ ಮುಂಭಾಗದ ಆವರಣದಲ್ಲಿ ಸಾರ್ವಜನಿಕರ ಸಮಕ್ಷಮ ಬಹಿರಂಗ ಹರಾಜು ಮಾಡಲು ನಿಗದಿಪಡಿಸಲಾಗಿದೆ. ಆದ್ದರಿಂದ ಇಚ್ಛೆಯುಳ್ಳವರು ಸದರಿ ಹರಾಜಿನಲ್ಲಿ ಭಾಗವಹಿಸಿ, ವಾಹನಗಳನ್ನು ಖರೀದಿಸಬಹುದಾಗಿರುತ್ತದೆ.

**ಹರಾಜಿನ ವಾಹನಗಳ ವಿವರಗಳು**

(1) ಸಿಎಇ 9789 ಅಂಬಾಸಿಡರ್ ಕಾರು ಮಾಡಲ್ 1981.
(2) ಎಂಇಓ 2234 ಮಹೇಂದ್ರ ಜೀಪು ಮಾಡಲ್ 1973.

ಈ ಮೇಲ್ಕಂಡ ವಾಹನಗಳನ್ನು ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸುವ ಬಿಡ್‌ದಾರರು ಈ ಕೆಳಗೆ ಸೂಚಿಸಿರುವ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರಬೇಕಾಗಿರುತ್ತದೆ.

**ಟೆಂಡರ್ : ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1. ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು (ಸೀಲ್ಡ್ ಕವರ್) ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ಇವರ ವಿಳಾಸಕ್ಕೆ ಕಳುಹಿಸಬೇಕು, ಲಕೋಟೆಯ ಮೇಲೆ ನಿರುಪಯುಕ್ತ ಪೊಲೀಸ್ ವಾಹನದ ಖರೀದಿ ಬಗ್ಗೆ ಎಂದು ನಮೂದಿಸಬೇಕು.
2. ಪ್ರತಿಯೊಬ್ಬ ಟೆಂಡರ್‌ದಾರರು : ಬಿಡ್‌ದಾರರು ಪ್ರತಿ ವಾಹನದ ಹರಾಜಿನಲ್ಲಿ ಭಾಗವಹಿಸಲು ಭದ್ರತಾ ಠೇವಣಿ ರೂ.2,500-00 (ಎರಡು ಸಾವಿರದ ಐನೂರು ರೂ. ಮಾತ್ರ) ನಗದು : ಡಿ.ಡಿ. ರೂಪದಲ್ಲಿ ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ಇವರ ಹೆಸರಿನಲ್ಲಿ ಪಾವತಿ ಮಾಡಿ ಅರ್ಜಿಯನ್ನು ಸಲ್ಲಿಸಬೇಕು, ಚೆಕ್ಕುಗಳನ್ನು ಸ್ವೀಕರಿಸುವುದಿಲ್ಲ. ಠೇವಣಿ ಹಣಕ್ಕೆ ಬಡ್ಡಿ ಕೊಡಲಾಗುವುದಿಲ್ಲ. ಠೇವಣಿ ಸಲ್ಲಿಸದೆ ಕಳಿಸಲಾದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
3. ಟೆಂಡರ್ ಫಾರಂನಲ್ಲಿ ವೆಚ್ಚವನ್ನು ಅಂಕಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ಪೂರ್ಣ ಸಹಿಯೊಂದಿಗೆ ದೃಢೀಕರಿಸಬೇಕು.
4. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
5. ಟೆಂಡರ್‌ದಾರರು ಟೆಂಡರ್‌ಗಳನ್ನು ದಿನಾಂಕ: 23.9.2004 ರಂದು ಸಂಜೆ 5.00 ಗಂಟೆಯ ಒಳಗೆ ಈ ಕಛೇರಿಗೆ ತಲುಪುವಂತೆ ಕಳುಹಿಸಬೇಕು. ತಡವಾಗಿ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಟೆಂಡರ್‌ದಾರರು ಸಹ ಹೆಚ್ಚಿನ ಭದ್ರತಾ ಠೇವಣಿ ಹಣವಿಲ್ಲದೆ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.
7. ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು, ಠೇವಣಿ ತುಂಬಿದ ಟೆಂಡರ್ : ಸವಾಲುದಾರರು ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
8. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆಯನ್ನು ದಾಖಲು ಮಾಡಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಯನ್ನು ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಾಗಲಿ ಸಾರ್ವಜನಿಕರ ಸಮಕ್ಷಮ ತೆರೆದು ಬಹಿರಂಗ ಪಡಿಸುವುದು ಈ ಎರಡರಲ್ಲಿ ಯಾರು ಹೆಚ್ಚಿನ ಬೆಲೆಯನ್ನು ನೀಡಿರುತ್ತಾರೋ ಅವರನ್ನು ಯಶಸ್ವಿ ಖರೀದಿದಾರರೆಂದು ಪರಿಗಣಿಸಲಾಗುವುದು.
9. ಯಶಸ್ವಿಯಾದ ಟೆಂಡರ್ : ಸವಾಲುದಾರರು ವಾಹನದ ಒಟ್ಟು ಬೆಲೆಯ ಶೇಕಡ 25 ರಷ್ಟು ಹಣವನ್ನು ಸ್ಥಳದಲ್ಲಿಯೇ ಕಟ್ಟಬೇಕು ಸದರಿ ವಾಹನದ ಅತೀ ಹೆಚ್ಚಿನ ಟೆಂಡರ್ : ಸವಾಲಿನ ಮೊತ್ತವನ್ನು ಡಿಜಿ ಮತ್ತು ಐಜಿಪಿ ಕರ್ನಾಟಕ ರಾಜ್ಯ, ಬೆಂಗಳೂರು ರವರು

ಅನುಮೋದಿಸಿ ನಂತರ ಶೇಕಡ 75 ರಷ್ಟು ಹಣ ಮತ್ತು ತೆರಿಗೆಯನ್ನು ಪಾವತಿ ಮಾಡಿ ಒಂದು ತಿಂಗಳ ಒಳಗಾಗಿ ತಮ್ಮ ಸ್ವಂತ ಖರ್ಚಿನಲ್ಲಿ ವಾಹನವನ್ನು ತೆಗೆದುಕೊಂಡು ಹೋಗಬೇಕು ತಪ್ಪಿದರೆ ಮುಂಗಡವಾಗಿ ಕಟ್ಟಿದ ಶೇಕಡ 75 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

10. ಪೂರ್ಣ ಮೊತ್ತವನ್ನು ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ರವರ ಕಛೇರಿಯಲ್ಲಿ ನಗದಾಗಿ ಪಾವತಿ ಮಾಡಬೇಕು, ಚೆಕ್ಕುಗಳನ್ನು ಸ್ವೀಕರಿಸಲಾಗುವುದಿಲ್ಲ.
11. ಹರಾಜಿನಲ್ಲಿ ಭಾಗವಹಿಸಿದ ಟೆಂಡರ್ : ಸವಾಲುದಾರರು ಹರಾಜು ಮುಗಿದ ನಂತರ ಹರಾಜಿನಲ್ಲಿ ಯಶಸ್ವಿಯಾದವರು ಮತ್ತು ಯಶಸ್ವಿಯಾಗದವರು ಸರ್ಕಾರಿ ನಿಯಮಗಳನ್ನು ಕಟ್ಟು ನಿಟ್ಟಾಗಿ ಪಾಲಿಸತಕ್ಕದ್ದು.
12. ಹರಾಜು ಮಾಡಲಾದ ವಾಹನದ ಮೌಲ್ಯಕ್ಕೆ ನಿಯಮಾನುಸಾರ ವಾಹನವನ್ನು ತೆಗೆದುಕೊಂಡು ಹೋಗುವ ಸಂದರ್ಭದಲ್ಲಿ ಚಾಲ್ತಿಯಲ್ಲಿರುವ ದರದ ಪ್ರಕಾರ ತೆರಿಗೆ ಮತ್ತು ಸೆಸ್‌ಗಳನ್ನು ಸಹ ಪಾವತಿ ಮಾಡಬೇಕು.
13. ಟೆಂಡರ್ ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಬಿಡ್‌ದಾರರ ತಪ್ಪು ಗ್ರಹಿಕೆಯಿಂದ ವಿವಾದ ಉಂಟಾಗಿ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹ ಟೆಂಡರ್ : ಸವಾಲುದಾರರು ಮುಂಗಡವಾಗಿ ಕಟ್ಟಿಡಲಾದ (ಇ.ಎಂ.ಡಿ.) ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಅಂತಹವರ ವಿರುದ್ಧ ಕಾನೂನು ಬದ್ಧವಾಗಿ ಕ್ರಮ ಕೈಗೊಳ್ಳಲಾಗುವುದು.
14. ಹರಾಜಿನ ಯಾವುದೇ ಟೆಂಡರ್ : ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಪಡಿಸುವ : ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು ಇವರು ಹೊಂದಿರುತ್ತಾರೆ. ಇವರ ತೀರ್ಮಾನವೇ ಅಂತಿಮವಾದುದು.
15. ಮೇಲ್ಕಂಡ ಟೆಂಡರ್ : ಹರಾಜಿನ ಸಂಬಂಧದಲ್ಲಿ ಯಾವುದೇ ವಾದ ವಿವಾದಗಳು ಉದ್ಭವಿಸಿದಲ್ಲಿ ಡಿ.ಜಿ. ಮತ್ತು ಐ.ಜಿ.ಪಿ. ಕರ್ನಾಟಕ ರಾಜ್ಯ, ಬೆಂಗಳೂರು ಇವರ ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.
16. ಹರಾಜು ಮಾಡಲಿರುವ ನಿರುಪಯುಕ್ತ ವಾಹನವನ್ನು ಕಾವೇರಿ ಭವನ್ ಹೌಸಿಂಗ್ ಬೋರ್ಡ್ ಸಂಕೀರ್ಣದ ಆವರಣದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ. ಇಚ್ಛೆಯುಳ್ಳವರು ಕಛೇರಿ ವೇಳೆಯಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್, ವಾಹನ ವಿಭಾಗ, ರವರನ್ನು ಸಂಪರ್ಕಿಸಿ ಪರಿಶೀಲನೆ ಮಾಡಿ ಹರಾಜಿನಲ್ಲಿ ಭಾಗವಹಿಸಿ ವಾಹನವನ್ನು ಕೊಳ್ಳಬಹುದು.

ಎಂ. ನರಸಿಂಹಯ್ಯ

ಪಿ.ಆರ್. 374 ಪೊಲೀಸ್ ಅಧೀಕ್ಷಕರು, ಬೆರಳು ಮುದ್ರೆ ಸಂಗ್ರಹಾಲಯ, ಬೆಂಗಳೂರು.

**PUBLIC WORKS DEPARTMENT**
**(National Highways)**
**Office of the Executive Engineer, National Highway Division,**
**Urva Store, Ashok Nagar, Mangalore-575006 Phone No.2450415**

## TENDER NOTIFICATION
**(Two Cover Bid System)**
**No. NHD/MNG/AE-2/CRF/NIT/2004-05/2983, dated: 21st July 2004**

Sealed Item rate Tenders for the works noted below under TWO COVER BID SYSTEM as per Karnataka Transparency in public procurement Ordinance 2000 and Act 2000 in prescribed form in duplicate is invited from the Class-I contractors registered in KPWD. Two cover bid system of tendering consists of "Technical Bid" and "Financial Bid". Bids will be received in two parts in two different sealed covers marked as" Technical Bid" and "Financial Bid". These two covers shall be sealed and kept in another sealed cover duly superscribing name of work and shall be addressed to the undersigned with name and full Postal address of the bidder. Completed bid will be received in the Office of the Superintending Engineer, National Highways Circle, Bangalore, OR in the Office of the Executive Engineer, National Highway Division, Urva Store, Mangalore Up to 4.00 P.M. on **30.08.2004,** subject to the conditions laid down in Form No. PWG 65 & 66 of KPWD code Vol-II, and in Karnataka Transparency in Public Procurement ordinance 2000 and Act 2000. The Technical Bids will be opened by the undersigned on the dates noted below. Financial Bid of only those bidders who qualify in the Technical Bid shall be opened. If any one of the dates noted below happens to be a general holiday, the next working day will hold good.

| Sl. No. | Name of Work | Amount Put to Tender (In Rs) | EMD (in Rs) | Cost of Tender forms (in Rs) Non refundable including taxes | Nature of work | Time for completion of work (Excluding Monsoon) |
|---|---|---|---|---|---|---|
| 1. | Improvements to Chikkagandsi-Bachenahally-Chindenahally Border-Kenkere-Dasarigatta in Gandsi Hobli in Hassan District. (Job No: CRF 312/KNT/2004) | 84,50,000 | 84,500 | 10,000 | C.D. Works/ Earth work/ S.D.B.C. | 12 Months |

**CONDITIONS:**

1. Pre qualification requirements are detailed in the Technical Bid. Each tenderer shall use following machinery and submit evidence of ownership/pocession as detailed below, at the time of submission of application. The documents shall be attested by a District level Officer, or otherwise the application will not be accepted.

| Sl.No. | Machinery | Numbers | Evidence of ownership to be furnished |
|---|---|---|---|
| i) | Hot Mix Plant of "Above 40 to 60 TPH" capacity (as per MOST Specification) | 1 | Purchase invoice/Sale deed with a copy of Purchase invoice from the seller. |
| ii) | Paver Finisher | 1 | -do- |
| iii) | Mechanical sprayers | 1 | -do- |
| iv) | Vibratory Road Roller | 1 | -do- |
| v) | Concrete Mixure | 2 | -do- |
| vi) | Static Road Roller | 2 | -do- |
| vii) | Tippers | 4 | Registration Certificate from R.T.O. |

2. The contractors interested in bidding for the work may submit an application to the undersigned along with cost of tender documents to be paid in the form of DD drawn in favour of the Executive Engineer, National Highway Division, Mangalore payable at Mangalore, along with application. The applicants should submit proof of registration while submitting the application for tender schedules, otherwise the application will not be considered.
3. Each Tenderer should have completed satisfactorily similar works of value not less than 30% of the value of the intended contract (up dated at 10% per annum compoundable) in any one financial year during a block period of previous five financial years. Alternatively the contractor should have completed a billing of 30% of the value of the intended contract during the current financial year for similar works. The work experience certificate in this regard should invariably have mention of same nature/items of work executed, along with date of commencement and date of completion; otherwise the technical bid is liable for disqualification.
4. For proof of Financial Capacity 'Line of Credit' from any Nationalised Bank or Schedule Bank shall invariably be produced in the prescribed proforma of Technical Bid for an amount equal to 50% of the amount put to tender for works. Non-Production of this certificate will lead to disqualification of the tender.
5. The **EMD** in the form of FDR/DD/Bankers Cheque/Bank Guarantee drawn from a Nationalised or Scheduled Bank or NSC (Pledged in favour of the undersigned) shall be enclosed to the **Technical Bid.** The Bank Guarantee Shall be in the Form as specified in PWG 66 supplied with the tender form. Otherwise tender will be rejected. Regarding the validity of EMD, tender condition etc. PWG-66 shall be referred and is binding on the tenderer.
6. **The Schedule of dates is as follows:**
   a) Last date for receipt of Application : 16-08-2004 in office hours
   b) Issue of Blank Tender Schedules : 25-08-2004 in office hours
   c) Last date for submission of Technical & Financial Bid : 30.08.2004 up to 4.00 PM
   d) Opening of Technical Bid : 30.08.2004 at 4.30 PM (If possible)
7. All documents enclosed in support of Technical Bids shall be attested by a **DISTRICT LEVEL OFFICER.** Otherwise, the bids are liable for disqualification. The original documents should be produced for verification on the day of opening of Technical Bid or otherwise tenders will be disqualified.
8. Financial Bids of the Technically qualified tenderers will be opened in the office of the Executive Engineer, National Highway Division, Mangalore on the date and time to be intimated in due course.
9. Only relevant certificates and details shall be furnished with the Technical Bid. **Details of company/agencies/Firms profiles need not be enclosed.**
10. The competent authority reserves the right to reject any or all tenders without assigning any reason there off.
11. The tendering by Joint venture is not allowed.
    Any other details regarding the work can be obtained from the above office during the office hours.

Executive Engineer,
National Highways Division, Mangalore.

PR - 360

## ಅರಣ್ಯ ಇಲಾಖೆ

## ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಆಯ್ಕೆ ಪ್ರಾಧಿಕಾರಿ

**ಅಧಿಸೂಚನೆ ಸಂಖ್ಯೆ: ಬಿ9.ನೇ.ನೇ.ಮೋಜ.ಸಿಆರ್-1/2004-05, ದಿನಾಂಕ: 14ನೇ ಜುಲೈ 2004**

ಅರಣ್ಯ ಇಲಾಖೆಯಲ್ಲಿ ಎರಡನೇ ದರ್ಜೆ ಮೋಜಣಿದಾರ ಹುದ್ದೆಗಳ ನೇರ ನೇಮಕಾತಿಗಾಗಿ ಈ ಕಛೇರಿ ಸಂಖ್ಯೆ: ಬಿ9.ನೇ.ನೇ.ಮೋ.ಜ.ಸಿಆರ್-1/2004-05, ದಿನಾಂಕ: 23.10.2003 ರಂತೆ ಅಧಿಸೂಚನೆ ಹೊರಡಿಸಿ ವಿವಿಧ ವೃತ್ತಗಳಲ್ಲಿ ಒಟ್ಟು 27 ಎರಡನೇ ದರ್ಜೆ ಮೋಜಣಿದಾರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಯಿತು.

ಕರ್ನಾಟಕ ಅರಣ್ಯ ಇಲಾಖಾ ಸೇವೆಗಳು (ನೇಮಕಾತಿ) (ತಿದ್ದುಪಡಿ) ನಿಯಮ 2003ರ ಅನುಸಾರ ಅರ್ಹರಾದ ಅಭ್ಯರ್ಥಿಗಳು ಆಯಾ ಹುದ್ದೆಗಳ ನೇಮಕಾತಿ ಲಿಖಿತ ಪರೀಕ್ಷೆಯಲ್ಲಿ ಮತ್ತು ಶೈಕ್ಷಣಿಕ ಅರ್ಹತಾ ಪರೀಕ್ಷೆಯಲ್ಲಿ ಗಳಿಸಿರುವ ಶೇಕಡಾವಾರು ಅಂಕಗಳನ್ನು ಕ್ರೋಢೀಕರಿಸಿ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 8 ಸೆಹಿಮ 95, ದಿನಾಂಕ: 20.6.1995 ಮತ್ತು ಸಂಖ್ಯೆ: ಸಿಆಸುಇ 97 ಸೆನನಿ 2002, ದಿನಾಂಕ: 22.11.2002 ರಲ್ಲಿ ಜಾರಿಯಲ್ಲಿರುವ ಮೀಸಲಾತಿ ನಿಯಮಗಳ ಅನುಸಾರ ಎರಡನೇ ದರ್ಜೆ ಮೋಜಣಿದಾರ ಹುದ್ದೆಯ ನೇಮಕಾತಿಗೆ ಅರ್ಹರಾದ ಅಭ್ಯರ್ಥಿಗಳ ಪಟ್ಟಿಯನ್ನು ಈ ಕೆಳಗಿನಂತೆ ಪ್ರಕಟಿಸಿದೆ.

**ಜೂನ್ 2004 ರಲ್ಲಿ ನಡೆದ ಪರೀಕ್ಷೆಗಳ ಆಧಾರದ ಮೇಲೆ ಎರಡನೇ ದರ್ಜೆ ಮೋಜಣಿದಾರ ಹುದ್ದೆಯ ನೇಮಕಾತಿಗಾಗಿ ಆಯ್ಕೆ ಮಾಡಲಾದ ಅಭ್ಯರ್ಥಿಗಳ ಪಟ್ಟಿ**

| ಕ್ರ. ಸಂ. | ನೋಂದಣಿ ಸಂಖ್ಯೆ | ಅಭ್ಯರ್ಥಿಯ ಹೆಸರು | ಲಿಂಗ | ಅರ್ಜಿಯಲ್ಲಿ ನಮೂದಿಸಿರುವ ವರ್ಗ | ಆಯ್ಕೆಯಾದ ವರ್ಗ | ನೇಮಕಾತಿ ಪರೀಕ್ಷಾ ಕೇಂದ್ರ | ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕಗಳು (%) | ಶೈಕ್ಷಣಿಕ ಅರ್ಹತಾ ಪರೀಕ್ಷೆ ಅಂಕಗಳು (%) | ಒಟ್ಟು ಅಂಕಗಳು (ಲಿಖಿತ + ಶೈಕ್ಷಣಿಕ) | ಹಂಚಿಕೆಯಾದ ವೃತ್ತ |
|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | 1258 | SANJAY LOTE | Male | II(a)/R | GM | Dharwad | 80 | 70.83 | 150.83 | Dharwad |
| 2 | 1879 | KAMALA T.R. | Female | III(a) | GM | Bangalore | 77 | 69.83 | 146.83 | Chamarajnagar |
| 3 | 2146 | SHREELAXMI NAYAK | Female | GM | GM | Mangalore | 70 | 74.83 | 144.83 | Mangalore |
| 4 | 1702 | HARISH KUMAR H.S. | Male | III(b)/R | GM | Mangalore | 66 | 78.40 | 144.40 | Hassan |
| 5 | 1780 | VANAHALLI JAIPRAKASH | Male | GM | GM | Dharwad | 72 | 72.00 | 144.00 | Chikmagalore |
| 6 | 1160 | PUSHPA M. | Female | III(b)/R | GM-Rural | Bangalore | 58 | 83.17 | 141.17 | Mysore. |
| 7 | 2892 | CHANDRA SHEKAR PRASAD T. | Male | III(a)/R | GM-Rural | Bangalore | 74 | 63.83 | 137.83 | Shimoga |
| 8 | 1909 | CHANDRAKUMAR K. | Male | II(a)/R | GM-Rural | Dharwad | 65 | 70.80 | 135.80 | Kanara Circle, Sirsi. |
| 9 | 2366 | EREGOWDA K. | Male | III(a)/R | GM-Rural | Bangalore | 59 | 75.00 | 134.00 | Kodagu |
| 10 | 1246 | RAJASEKAR PARAPPA VAJANTRI | Male | SC | SC | Gulbarga | 77 | 60.83 | 137.83 | Dharwad |

| 1 | 2 | 3 | 4 | 5 | 6 | 7 | 8 | 9 | 10 | 11 |
|---|---|---|---|---|---|---|---|---|---|---|
| 11 | 1670 | SATHYAMURTHY M. | Male | SC | SC | Bangalore | 69 | 65.33 | 134.33 | Hassan |
| 12 | 1146 | LAXMAN KATTIMANI | Male | SC/R | SC | Gulbarga | 61 | 71.50 | 132.50 | Mangalore |
| 13 | 1007 | KUMAR NAIK K.R. | Male | SC | SC | Bangalore | 55 | 70.00 | 125.00 | Chickmagalore |
| 14 | 1328 | SADANAND KEMBHAVI | Male | SC | SC | Gulbarga | 60 | 60.83 | 120.83 | Chamarajnagar |
| 15 | 1937 | MANJUNATH DEVAPPA BAGEWADI | Male | ST | ST | Dharwad | 63 | 72.67 | 135.67 | Dharwad |
| 16 | 1314 | PUTTARAJU G. | Male | ST/R | ST | Bangalore | 57 | 70.67 | 127.67 | Chamarajnagar |
| 17 | 1170 | SRINIVAS D. | Male | ST | ST | Bangalore | 66 | 55.83 | 121.83 | Hassan |
| 18 | 2643 | RAJESH | Male | ST/R | ST | Gulbarga | 52 | 66.67 | 118.67 | Mangalore |
| 19 | 1057 | MADALUR SATISH | Male | ST | ST | Bangalore | 63 | 55.00 | 118.00 | Chickmagalore |
| 20 | 1300 | CHATURVEDI K.C. | Male | Cat-I | Cat-I | Bangalore | 59 | 69.67 | 128.67 | Shimoga |
| 21 | 2477 | SHYLA H.R. | Female | I/R | Cat-I | Bangalore | 47 | 80.67 | 127.67 | Mysore |
| 22 | 1854 | SUDHAKAR S. | Male | Cat-I | Cat-I | Bangalore | 61 | 64.83 | 125.83 | Kodagu |
| 23 | 2157 | CHIDANANDAPPA G. | Male | I/R | Cat-I | Bangalore | 53 | 68.83 | 121.83 | Kanara Circle, Sirsi. |
| 24 | 1358 | MAHANTESH M. SAJJAN | Male | Cat-II(a) | Cat-II(a) | Gulbarga | 64 | 64.67 | 128.67 | Kanara Circle, Sirsi. |
| 25 | 1462 | SANDEEP TEJASVI T | Male | Cat-II(a) | Cat-II(a) | Bangalore | 67 | 60.17 | 127.17 | Mysore |
| 26 | 2311 | THIPPESWAMY B.M. | Male | Cat-II(a)/R | Cat-II(a) | Mangalore | 68 | 59.00 | 127.00 | Kodagu |
| 27 | 1544 | PRAMOD M.S. | Male | Cat-II(a) | Cat-II(a) | Bangalore | 65 | 62.00 | 127.00 | Shimoga |

ಮೇಲಿನ ಅಭ್ಯರ್ಥಿಗಳ ನೇಮಕಾತಿಯು ಈ ಕಛೇರಿ ಅಧಿಸೂಚನೆ ಸಮ ಸಂಖ್ಯೆ ದಿನಾಂಕ: 29.1.2004ರ ನಿಬಂಧನೆಗಳಿಗೆ ಒಳಪಟ್ಟಿರುತ್ತದೆ.

ಪಿ.ಆರ್. 363

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಆಯ್ಕೆ ಪ್ರಾಧಿಕಾರಿ.